KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**



| ಸಂಪುಟ ೧೪೪ | ಬೆಂಗಳೂರು, ಗುರುವಾರ, ಜುಲೈ ೩೦, ೨೦೦೯ (ಶ್ರಾವಣ ೮, ಶಕ ವರ್ಷ ೧೯೩೧) | ಸಂಚಿಕೆ ೩೧ |
|---|---|---|



## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಶ್ರೀ ಜಿ.ಬಿ. ದೇಸಾಯಿ ನಿರ್ದೇಶಕರು (ಸಿ), ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಇವರ ವಿರುದ್ಧದ ಆರೋಪಗಳ ವಿಚಾರಣೆಯ ಅಂತಿಮ ಆದೇಶ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ :ಸಿಆಸುಇ 4 ಎಸ್ಇಎನ್ 2005, ದಿನಾಂಕ :28.11.2006.

2) ಪ್ರಾದೇಶಿಕ ಆಯುಕ್ತರು ಬೆಳಗಾವಿ ವಿಭಾಗ, ಬೆಳಗಾವಿ ಹಾಗೂ ವಿಚಾರಣಾಧಿಕಾರಿಗಳು ಇವರ ವರದಿ ದಿನಾಂಕ :14.8.2007ರ.

**ಪ್ರಸ್ತಾವನೆ:**

ಡಾ: ಜಿ.ಬಿ. ದೇಸಾಯಿ ನಿವೃತ್ತ, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ, ಸೇವೆಗಳು ಇವರು ನಿರ್ದೇಶಕರ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ 2003–04 ಮತ್ತು 2004–05 ನೇ ಸಾಲಿಗಾಗಿ ಆಸ್ಪತ್ರೆಗಳಿಗೆ ಬೇಕಾದ ವಿವಿಧ ಡಿಸ್ಪೋಸಿಬಲ್ ಸಿರಂಜ್‌ಗಳು ಹಾಗೂ ಸರ್ಜಿಕಲ್ ಉಪಕರಣಗಳ ಖರೀದಿಯಲ್ಲಿ ಅವ್ಯವಹಾರ ಎಸಗಿದ್ದಾರೆಂಬ ಆರೋಪಕ್ಕಾಗಿ ಮೇಲೆ (1)ರಲ್ಲಿ ಓದಲಾದ ದಿನಾಂಕ:26.11.2006ರ ಸರ್ಕಾರಿ ಆದೇಶದಲ್ಲಿ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಆದೇಶಿಸಿ ಪ್ರಾದೇಶಿಕ ಆಯುಕ್ತರು ಬೆಳಗಾವಿ ವಿಭಾಗ ಬೆಳಗಾವಿ ಇವರನ್ನು ವಿಚಾರಣಾಧಿಕಾರಿಯಾಗಿ ನೇಮಿಸಲಾಗಿತ್ತು. ವಿಚಾರಣಾಧಿಕಾರಿಗಳು ಮೇಲೆ ಓದಲಾದ (2)ರ ದಿನಾಂಕ:14.8.2007ರ ವಿಚಾರಣಾ ವರದಿ ಸಲ್ಲಿಸಿ ಪ್ರಕರಣದಲ್ಲಿ ಡಾ:ಜಿ.ಬಿ. ದೇಸಾಯಿ ಅವರು ಭಾರತ ಸರ್ಕಾರದ ದರ ಗುತ್ತಿಗೆ ಅಡಿಯಲ್ಲಿ ನಿಯಮಗಳನ್ನು ಪಾಲಿಸಿ ಪರಿಕರಗಳನ್ನು ಖರೀದಿಸಲು ಜಿಲ್ಲಾ ಆರೋಗ್ಯ ಅಧಿಕಾರಿಗಳಿಗೆ ಅನುಮತಿ ನೀಡಿದ್ದಾರೆ. ಸಿಗ್ಮಾ ಮಾರ್ಕೆಟಿಂಗ್ ಸಂಸ್ಥೆಯು ಅಂಗೀಕೃತವಲ್ಲವೆಂದು ತಿಳಿಸಿ ಭಾರತ ಸರ್ಕಾರದ ದಿನಾಂಕ:15.3.2004ರ ಪತ್ರವು ಭಾರತ ಸರ್ಕಾರದ ದಿನಾಂಕ:30.3.2004ರ ನೆನಪೋಲೆಯೊಡನೆ ದಿನಾಂಕ:13.4.2004 ರಂದು ನಿರ್ದೇಶನಾಲಯದಲ್ಲಿ ಸ್ವೀಕರಿಸಲ್ಪಟ್ಟಿದೆ.

ಈ ಮಾಹಿತಿ ದೊರತ ತಕ್ಷಣವೇ ಆರೋಪಿಯು ಎಲ್ಲಾ ಜಿಲ್ಲಾ ಆರೋಗ್ಯ ಅಧಿಕಾರಿಗಳಿಗೆ ದಿನಾಂಕ:19.4.2004 ರಂದು ಟೆಲಿಗ್ರಾಂ ಕಳುಹಿಸಿ ಸಿಗ್ಮಾ ಸಂಸ್ಥೆಗೆ ಹಣ ಪಾವತಿ ಮಾಡದಿರುವಂತೆ ಸೂಚನೆ ನೀಡಿದ್ದಾರೆ. ಹಾಗೂ ಕೋಟಾ ದಾಖಲೆಗಳನ್ನು ಸಲ್ಲಿಸಿದ ಸಿಗ್ಮಾ ಸಂಸ್ಥೆಯ ವಿರುದ್ಧ ದಿನಾಂಕ:7.5.2004ರಂದು ಶೇಷಾದ್ರಿಪುರಂ ಪೊಲೀಸ್ ಠಾಣೆಗೆ ದೂರನ್ನು ದಾಖಲಿಸಿದ್ದಾರೆ. ಭಾರತ ಸರ್ಕಾರದ ಪತ್ರಗಳನ್ನು ನಿರ್ದೇಶನಾಲಯ ಮುಖ್ಯ ಲೆಕ್ಕಾಧಿಕಾರಿಗಳು ಆರೋಪಿಗೆ ವಿಳಂಬವಾಗಿ ಸಲ್ಲಿಸಿದ್ದಾರೆ. ಮೇಲಾಗಿ ಜಿಲ್ಲಾ ಆರೋಗ್ಯ ಅಧಿಕಾರಿಗಳ ಲಿಖಿತ ಬೇಡಿಕೆಗಳನ್ನು ಸಲ್ಲಿಸಿದ ನಂತರವೇ ಆರೋಪಿಯು ಅನುಮತಿ ನೀಡಿರುವುದು ಕಂಡುಬರುತ್ತದೆ. ಆದ್ದರಿಂದ ಆರೋಪ ಸಾಬೀತಾಗಿಲ್ಲ ಎಂಬ ಅಭಿಪ್ರಾಯ ನೀಡಿದ್ದಾರೆ.

ವಿಚಾರಣಾ ವರದಿಯಲ್ಲಿ ಡಾ: ಜಿ.ಬಿ. ದೇಸಾಯಿ ನಿರ್ದೇಶಕರು (ನಿವೃತ್ತ) ಇವರ ವಿರುದ್ಧದ ಆರೋಪವು ಸಾಬೀತಾಗಿರುವುದಿಲ್ಲವೆಂಬ ವರದಿಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿದೆ. ಈ ವಿಚಾರಣಾ ವರದಿಯನ್ನು ಅಂಗೀಕರಿಸಲು ನಿರ್ಣಯಿಸಿ ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 04 ಎಸ್‌ಇಎನ್ 2005, ಬೆಂಗಳೂರು, ದಿನಾಂಕ: 24ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಶ್ರೀ ಜಿ.ಬಿ. ದೇಸಾಯಿ ನಿರ್ದೇಶಕರು (ನಿವೃತ್ತ) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಅವರನ್ನು ಪ್ರಸ್ತಾವನೆಯಲ್ಲಿ ವಿವರಿಸಿದ ಆರೋಗಳಿಂದ ದೋಷಮುಕ್ತಗೊಳಿಸಿ ಆದೇಶಿಸಿದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಶ್ರೀಯುತರು ಯಾವ ಸೌಲಭ್ಯಗಳನ್ನು ಪಡೆಯುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಾಗಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 798 ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಆರ್.ಎಚ್. ರೆಡ್ಡಿ ನಿವೃತ್ತ ಜಿಲ್ಲಾ ನ್ಯಾಯಾಧೀಶರು ಅವರ ವಿರುದ್ಧ ಕೆ.ಸಿ.ಎಸ್.ಆರ್ಸ್. ನಿಯಮ 214 ರನ್ವಯ ಶಿಸ್ತು ಕ್ರಮವನ್ನು ಜರುಗಿಸಲು ಸರ್ಕಾರದ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:** ಪತ್ರ ಸಂಖ್ಯೆ ಹೆಚ್ ವಿಸಿ 36/05, ದಿನಾಂಕ :25.10.2008 ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ ಬೆಂಗಳೂರು, ಅವರಿಂದ.

**ಪ್ರಸ್ತಾವನೆ:**

ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು, ಅವರು ಮೇಲೆ ಓದಲಾದ ದಿನಾಂಕ:25.10.2008ರ ಪತ್ರದಲ್ಲಿ ಶ್ರೀ ಆರ್.ಎಚ್. ರೆಡ್ಡಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು (ನಿವೃತ್ತ ದಿನಾಂಕ:30.6.2005) 21ನೇ ಅಡಿಷನಲ್ ಸಿಟಿ ಸಿವಿಲ್ ಅಂಡ್ ಸೆಷನ್ಸ್ ಜಡ್ಜ್ ಬೆಂಗಳೂರು (ಸಿಬಿಐ ಪ್ರಕರಣಗಳ ವಿಚಾರಣಾ ನ್ಯಾಯಾಲಯ) ಈ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಮಾಜಿ ಮುಖ್ಯಮಂತ್ರಿ ಎಸ್. ಬಂಗಾರಪ್ಪ ಅವರ ವಿರುದ್ಧ ಹೂಡಲಾದ ವಿಶೇಷ ಸಿಸಿ ಸಂಖ್ಯೆ 47/99ರಲ್ಲಿ ಆರೋಪಿ ಪರ ವಕೀಲರಿಂದ ಅಪಾರ ಪ್ರಮಾಣದ ಅಕ್ರಮ ಸಂಭಾವನೆಯನ್ನು ಪಡೆದು ಸಂಶಯಕ್ಕೆ ಎಡೆಮಾಡುವ ರೀತಿಯಲ್ಲಿ ಪ್ರಕರಣದ ವಿಚಾರಣೆ ನಡೆಸಿದಂತೆ ಕೇಸ್ ಶೀಟ್‌ಗಳಲ್ಲಿ ನಮೂದುಗಳನ್ನು ಮಾಡಿ ಆರೋಪಿಯನ್ನು ಖುಲಾಸೆಗೊಳಿಸಿ ಕಾಲ್ಪನಿಕ ದಿನಾಂಕಗಳಲ್ಲಿ ಆದೇಶವನ್ನು ಹೊರಡಿಸಿರುವುದು ಉಚ್ಚ ನ್ಯಾಯಾಲಯದ ವಿಚಕ್ಷಣ ಘಟಕವು ನಡೆಸಿದ ಪ್ರಾಥಮಿಕ ತನಿಖೆಯಿಂದ ಮೇಲ್ನೋಟಕ್ಕೆ ದೃಢಪಟ್ಟಿದ್ದು ಇದಕ್ಕಾಗಿ ಅವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 214ನೇ ನಿಯಮದನ್ವಯ ಶಿಸ್ತು ಕ್ರಮವನ್ನು ಜರುಗಿಸಲು ಸರ್ಕಾರದ ಮಂಜೂರಾತಿ ನೀಡುವಂತೆ ಕೋರಿದ್ದಾರೆ. ಕರ್ನಾಟಕ ಉಚ್ಚ ನ್ಯಾಯಾಲಯದ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಅದನ್ನು ಒಪ್ಪಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 1 ಸೇಉನ್ಯಾ 2009, ಬೆಂಗಳೂರು, ದಿನಾಂಕ: 3ನೇ ಮಾರ್ಚ್ 2009**

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 214(2)(ಬಿ)(i)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಆರ್.ಎಚ್. ರೆಡ್ಡಿ ನಿವೃತ್ತ ಜಿಲ್ಲಾ ನ್ಯಾಯಾಧೀಶರು ಅವರ ವಿರುದ್ಧ ಮೇಲೆ ಹೇಳಿದ ಆರೋಪ ಕುರಿತು ಶಿಸ್ತು ಕ್ರಮವನ್ನು ಜರುಗಿಸಲು ಕರ್ನಾಟಕ ಉಚ್ಚ ನ್ಯಾಯಾಲಯಕ್ಕೆ ಈ ಮೂಲಕ ಮಂಜೂರಾತಿ ನೀಡುತ್ತದೆ.

ವಿಚಾರಣೆಯು ಬೆಂಗಳೂರಿನಲ್ಲಿ ನಡೆಯತಕ್ಕದ್ದು ಹಾಗೂ ಸೇವೆಯಲ್ಲಿರುವ ಸರ್ಕಾರಿ ನೌಕರನನ್ನು ಸೇವೆಯಿಂದ ವಜಾ ಮಾಡುವಾಗ ಅನುಸರಿಸುವ ಕಾರ್ಯ ವಿಧಾನವನ್ನು ಈ ವಿಚಾರಣೆಯಲ್ಲಿಯೂ ಅನುಸರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್. ಶಿವರಾಮ್**

ಪಿ.ಆರ್. 799 ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3)

**COMMERCE & INDUSTRIES SECRETARIAT**

**Sub :** Sub-lease of 8.0069 acres of land to M/s Gyenex De-Sulphur India [P] Ltd.,

**Read :**
1) Proceedings of the 45th SLSWCC meeting held on 3.10.2008
2) SLSWCC Letter No. KUM/SLSWCC-45/AD/339/2008-09 Dated 21.10.2008 issued to the Company.
3) Letter No. KUM/SLSWCC /AD/399/2008-09 dated :19.1.2009.

**Preamble :**

M/s Gyenex De-sulphur India [P] Ltd., Bellary has proposed to establish unit for manufacture of ''Desulphurising Compound [DSC]'' with an investment of Rs. 45.00 crores, in 8 acres of land to be taken

on sub-lease from M/s JSW steel Ltd., adjacent to the factory of M.s Jamipol at No.A/4/9 W, Nagar, Torangallu, Sandur, Bellary.

The Proposal has been considered in the 45th State Level Single Window Clearance Committee held on 3.10.2008 and after detailed discussions the project is approved to establish unit for manufacture of ''Desulphurising Compound [DSC]'' with an investment of Rs 45.00 crores, in 8 acres of land to be taken on sub-lease from M/s JSW Steel Ltd., Hence the following order.

**Government Order No.CI 20 SPI 2009, Bangalore, Dated: 13th February 2009**

In the circumstances explained above, The Government is pleased to approve the project proposal of M/s Gyenex De-sulphur India [P] Ltd., Bellary.

**INFRASTRUCTURE FACILITIES:**

**Land:** For manufacture of ''Desulphurising Compound [DSC]'' 8 acres of land to be taken on sub-lease from M/s JSW Steel Ltd., adjacent to the factory of M/s Jamipol at No.A/4/9, W Nagar ,Torangallu, Sandur, Bellary.

**Power:** BESCOM to service 500KVA power supply.

**Water:** the Unit shall adopt Rain Water harvesting waste water recycling.

**Environment Clearnace:** The promoters were advised to obtain EC from State No work shall commence without prior to EC, as per prevailing Law.

**Pollution Control:** The promoters were advised to obtain consent from KSPCB to establish the units.

**Building and Machinery/Layout Plan Approval:** The promoters to obtain prior approval for proposed building plan and machinery layout from factories and boilers Department.

**Employment:** The Company shall prepare a plan for development of human resource required for the project, train local people and provide employment to these trained local youth and comply with Government policy providing Employment to local people. A copy of human resource development plan shall be sent to the Commissioner for I.D. & Director of Industries and Commerce for monitoring.

**Incentives and Concessions:** As applicable under Industrial Policy 2006-11.

**Statutory Approval and Clearances:** Company to obtain statuory Clearance and apporver as applicable.

**Others:** The promoter shall provide employment to local Kanadigas as per Dr. Sarojini Mahishi Report, wherever possible solar lighting and solar water heating must be adopted. There shall no violation of zoning regulations.

In pursuance of the decision of the SLWCC, Government has no objection to sub-lease 8.0069 acres of land to M/s Gyenex De-sulphur India [P] Ltd., from M/s JSW Steel Ltd., as per the schedule given below

| Sl.No | Village | Survey Nos. | Extent [Acres] |
|---|---|---|---|
| 1 | Torangallu | 82 | 0.2823 |
| 2 | Torangallu | 83 | 1.5458 |
| 3 | Torangallu | 97 | 0.9468 |
| 4 | Torangallu | 98 | 1,658 |
| 5 | Torangallu | 154 | 3.574 |
| | **Total** | | **8.0069** |

By order and in the name of the Governor of Karnataka,

**APARNA PAVATE**

P.R. 628

Desk Officer (Technical Cell)

Commerce & Industries Department

**PERSONNEL AND ADMINISTRATIVE REFORMS SECRETARIAT**

**Government Order No. DPAR 04 SFP 2009, Bangalore, Dated:10th February, 2009**

**Sub:** Redesignation & up-gradation of the Cadre post of Principal Chief Conservator of Forests in Karnataka State in terms of IFS (Pay) Amendment Rules, 2008- issue of orders- regarding.

**Read:** 1) Notification No. 14021/4/2008-AIS-II, dated :27.9.2008 of Government of India, DOPT, New Delhi.

2) Letter dated 27.9.2008 from the Government of India, Ministry of Personnel, Public Grievances & Pensions, Department of Personnel and Training, New Delhi, addressed to the Chief Secretaries of all the State Governments.

In pursuance of the letter dated 27.9.2008 of the Government of India read at Sl.No. 2 above and under rule 3(1)(D)(iii) of IFS (Pay) 2nd Amendment Rules, 2008 vide Government of India Notification read at Sl.No. 1 above the existing IFS cadre post of Principal Chief Conservator of Forests, Karnataka, Bangalore in the "Above Super Time Scale (HAG+) of Rs .75, 500/- (Annual increment at 3%) Rs. 80,000/- (fixed) Grade Pay-Nil" is upgraded and designated as Principal Chief Conservator of Forests (Head of Forest Force), Karnataka, Bangalore in the "Above Super Time Apex Scale of Rs.80,000/- (fixed) Grade Pay Nil w.e.f 27.9.2008 i.e. date of issue of Notification of IFS (Pay) Amendment Rules, 2008.

The incumbent who occupies the said post will be entitled to draw the apex scale of Rs. 80,000 (fixed) Grade Pay Nil as long as he/she occupies the said post.

The post of Principal Chief Conservator of Forests (Head of Forest Force) Karnataka Bangalore in the Apex scale shall be filled by Selection from amongst the IFS officers holding the post of PCCF in the State Cadre in the ''Above Super Time Scale (HAG+)Rs. 75,500/- (annual increment of 3%)-80, 000/- Grade Pay Nil'' as per Note 2 below rule 3(1) (D) of IFS Pay 2nd Amendment Rules, 2008.

By order and in the name of the Governor of Karnataka

**ASHOK.P. ATRE**

P.R. 630

Under Secretary to Government

Department of Personnel and Administrative Reforms (Services-4)

**INFRASTRUCTURE DEVELOPMENT SECRETARIAT**

**Sub :** Release of funds for construction of RuB in heu of L.C.No. 31 between Gadag-Hulakoti Stations (Deposit works).

**Read :** 1) G.O. No. IDD 121 NSW 06 dated :16.6.2008.

2) G.O.No. IDD 65 NSW 08 dated :31.1.2009.

3) Letter No. RUB /GDG/154/Est dated :18.12.2008 from the Deputy Chief Engineer, Construction, SWR Hubli.

**PREAMBLE:**

In the Government Orders read at (1) & (2) above, Government of Karnataka has released so far an amount of Rs. 3.90 crore towards construction of RuB in heu of L.C. No. 31 located between Gadag-Hulakoti Stations on deposit contribution work basis.

2. The Deputy Chief Engineer, Construction, SWR, Hubli in his letter read at (3) above has stated that as per the detailed estimate the total cost works out to be Rs .4.90 crores and has requested to release the balance amount of Rs. 1.00 crores towards construction of the said RuB.

3. The Proposal of Railways has been examined and it has been decided to release an amount of Rs .1.00 crore out of the Budget of Rs. 30.00 crore provided under Head of Account 5465-01-190-3-04 (P)-211K-RIDE ROB/BUB projects during 2008-09 Hence this order.

**Government Order No.IDD 65 NSW 2008, Bangalore, Dated:12th February 2009**

Government is pleased to release an amount of Rs. 1.00 Crores (one Crore Only) towards construction of RuB in lieu of L.C.No. 31 between Gadag-Hulakoti Stations for deposit contribution work.

2. This amount shall be met out under the Budgetary Head of Account 5465-01-190-3-04(P)-211K-RIDE, ROB/RUB projects.

3. The Chief Executive Officer, K-RIDE, is authorized to draw the amount on a payee's receipt duty countersigned by the Under Secretary to Govt., IDD and CFO, K-RIDE, shall in turn deposit the same with the Financial Advisor and Chief Accounts Officer (Construction), SWR, Bangalore.

4. This order is issued in exercise of the Financial Powers delegated vide, G.O.No. FD 1 TFP 2008 dated 16.5.08 to Secretaries/Principal Secretaries of Administrative Department.

By order and in the name of the Governor of Karnataka,

**N. MANJULA GEETHA**

P.R. 649

Under Secretary to Government

Infrastructure Development Department

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ:** ಆಯುಷ್ (ಆಯುರ್ವೇದ, ಯೋಗ, ಯುನಾನಿ ಮತ್ತು ಹೋಮಿಯೋಪತಿ) ಪದವಿ ಕೋರ್ಸುಗಳ ವ್ಯಾಸಂಗಕ್ಕೆ ಪ್ರವೇಶ ಪರೀಕ್ಷೆಯನ್ನು ರದ್ದುಪಡಿಸುವ ಬಗ್ಗೆ.

**ಪ್ರಸ್ತಾವನೆ:**

ನಮ್ಮ ರಾಜ್ಯದಲ್ಲಿರುವ ಸರ್ಕಾರಿ ಮತ್ತು ಖಾಸಗಿ ಆಯುಷ್ (ಆಯುರ್ವೇದ, ಯೋಗ, ಯುನಾನಿ, ಮತ್ತು ಹೋಮಿಯೋಪತಿ) ವಿಜ್ಞಾನ ಸಂಸ್ಥೆಗಳಲ್ಲಿ ಬೋಧಿಸುತ್ತಿರುವ ಆಯುಷ್ (ಆಯುರ್ವೇದ, ಯೋಗ, ಯುನಾನಿ, ಮತ್ತು ಹೋಮಿಯೋಪತಿ) ವ್ಯಾಸಂಗಗಳಿಗೆ ಪ್ರವೇಶವನ್ನು ಕರ್ನಾಟಕ ಪರೀಕ್ಷಾ ಪ್ರಾಧಿಕಾರವು ನಡೆಸುವ ಪ್ರವೇಶ ಪರೀಕ್ಷೆಯ ಮೂಲಕ ನೀಡಲಾಗುತ್ತಿದೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ, ಆಯುಷ್ ((ಆಯುರ್ವೇದ, ಯೋಗ, ಯುನಾನಿ, ಮತ್ತು ಹೋಮಿಯೋಪತಿ) ಪದವಿ ವ್ಯಾಸಂಗದ ಪ್ರವೇಶಕ್ಕೆ ಪ್ರಸ್ತುತ ಜಾರಿಯಲ್ಲಿರುವ ಪ್ರವೇಶ ಪರೀಕ್ಷೆಯನ್ನು ರದ್ದುಪಡಿಸಿ, ದ್ವಿತೀಯ ಪಿಯುಸಿ/12ನೇ ತರಗತಿಯಲ್ಲಿ ಪಡೆದಿರುವ ಅಂಕಗಳ ಆಧಾರದ ಮೇಲೆ ಆಯುಷ್ (ಆಯುರ್ವೇದ, ಯೋಗ, ಯುನಾನಿ, ಮತ್ತು ಹೋಮಿಯೋಪತಿ) ಸೀಟುಗಳನ್ನು ಹಂಚಿಕೆ ಮಾಡಲು ಸರ್ಕಾರವು ತೀರ್ಮಾನಿಸಿ, ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆಕುಕ 47 ಪಿಟಿಡಿ 2009, ಬೆಂಗಳೂರು, ದಿನಾಂಕ: 5ನೇ ಮಾರ್ಚ್ 2009**

2009–10ನೇ ಸಾಲಿನಿಂದ ಆಯುಷ್ (ಆಯುರ್ವೇದ, ಯೋಗ, ಯುನಾನಿ, ಮತ್ತು ಹೋಮಿಯೋಪತಿ) ಪದವಿ ಕೋರ್ಸುಗಳ ವ್ಯಾಸಂಗದ ಪ್ರವೇಶಕ್ಕೆ ಪ್ರಸ್ತುತ ಜಾರಿಯಲ್ಲಿರುವ ಸಾಮಾನ್ಯ ಪ್ರವೇಶ ಪರೀಕ್ಷೆಯನ್ನು (CET)ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ, ಮುಂದಿನ ಆದೇಶದವರೆಗೆ ದ್ವಿತೀಯ ಪಿಯುಸಿ/12ನೇ ತರಗತಿಯಲ್ಲಿ ಕನಿಷ್ಠ ಶೇ 50 ರಷ್ಟು ಅಂಕಗಳನ್ನು ಪಡೆದಿರುವ ವಿದ್ಯಾರ್ಥಿಗಳಿಗೆ ಮೆರಿಟ್ ಆಧಾರದ ಮೇಲೆ ಆಯುಷ್ (ಆಯುರ್ವೇದ, ಯೋಗ, ಯುನಾನಿ, ಮತ್ತು ಹೋಮಿಯೋಪತಿ) ಪದವಿ ಕೋರ್ಸುಗಳ ವ್ಯಾಸಂಗಕ್ಕೆ ಸೀಟುಗಳನ್ನು ಕರ್ನಾಟಕ ಪರೀಕ್ಷಾ ಪ್ರಾಧಿಕಾರದಿಂದ ಹಂಚಿಕೆ ಮಾಡಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ವೈದ್ಯಕೀಯ ಮತ್ತು ಇಂಜಿನಿಯರಿಂಗ್ ವ್ಯಾಸಂಗಕ್ಕೆ ಕೌನ್ಸಿಲಿಂಗ್ ಮುಗಿದ ನಂತರ ಆಯುಷ್ ವ್ಯಾಸಂಗಗಳಿಗೆ ಕೌನ್ಸಿಲಿಂಗನ್ನು ಜರುಗಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಹಾಲಕ್ಷ್ಮಮ್ಮ**

ಪಿ.ಆರ್. 860

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾರತೀಯ ವೈದ್ಯ ಪದ್ಧತಿ)

**ಶಿಕ್ಷಣ ಸಚಿವಾಲಯ**

**ತಿದ್ದುಪಡಿ ಆದೇಶ ಸಂಖ್ಯೆ:ಇಡಿ:193:ಯೋಯೋಕ 2008, ಬೆಂಗಳೂರು, ದಿನಾಂಕ:2ನೇ ಮಾರ್ಚ್, 2009**

**ವಿಷಯ:** ಶಿಕ್ಷಣ ಇಲಾಖೆಯ ಉನ್ನತ ಶಿಕ್ಷಣ ವಲಯದಡಿ ಬರುವ ಕಾಲೇಜು ಶಿಕ್ಷಣ ಇಲಾಖೆಯಡಿ ಹೊಸ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳನ್ನು ಪ್ರಾರಂಭಿಸುವ ಬಗ್ಗೆ ಹೊರಡಿಸಿದ ಆದೇಶಕ್ಕೆ ತಿದ್ದುಪಡಿ ಮಾಡುವ ಕುರಿತು.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ:[ಇಡಿ:144:ಯೋಯೋಕಾ 2007, ದಿನಾಂಕ:23.7.2007]
[ಇಡಿ:105: ಸ್ವೀಮರ (ಯುನಿಕ್) 2009, ದಿನಾಂಕ:23.7.2007]

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ ಸರ್ಕಾರದ ಆದೇಶದ ಅನುಬಂಧದಲ್ಲಿನ

| ಜಿಲ್ಲೆ | ಗ್ರಾಮದ ಹೆಸರು | ತಾಲ್ಲೂಕಿನ ಹೆಸರು |
|---|---|---|
| ಮೈಸೂರು | ಹನಗೋಡು | ಹುಣಸೂರು |
| ಹಾಸನ | ಹೆತ್ತೂರು | ಸಕಲೇಶಪುರ |
| ಚಿಕ್ಕಮಗಳೂರು | ಯಗಟಿ | ಕಡೂರು |
| ಉತ್ತರ ಕನ್ನಡ | ಬಾಡ | ಕುಮಟಾ |

**ಎಂಬುದಕ್ಕೆ ಬದಲಾಗಿ**

| ಜಿಲ್ಲೆ | ಗ್ರಾಮದ ಹೆಸರು | ತಾಲ್ಲೂಕಿನ ಹೆಸರು |
|---|---|---|
| ಬೆಳಗಾವಿ | ಯರಗಟ್ಟಿ | ಸವದತ್ತಿ |
| ಬಾಗಲಕೋಟೆ | ಕಲಾದಗಿ | ಬೀಳಗಿ |
| ಬಾಗಲಕೋಟೆ | ರಬಕವಿ–ಬನಹಟ್ಟಿ | ಜಮಖಂಡಿ |
| ಮೈಸೂರು | ಕೆ.ಆರ್. ನಗರ | ಕೆ.ಆರ್. ನಗರ |

ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಉಳಿದ ಅಂಶಗಳು ಯಥಾವತ್ತಾಗಿ ಮುಂದುವರೆಯುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ.ಎಫ್. ಮಾಗಿ**

ಪಿ.ಆರ್. 880

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಯೋಜನೆ)

## ಕಾರ್ಮಿಕ ಸಚಿವಾಲಯ

**ವಿಷಯ:** 1999ನೇ ಸಾಲಿನ ಪ್ರೋಬೇಷನರಿ ಸಹಾಯಕ ಕಾರ್ಮಿಕ ಆಯುಕ್ತರುಗಳು ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಅಧಿಸೂಚನೆ ಸಂಖ್ಯೆ :ಕಾಇ 326 ಎಲ್ಇಟಿ 2005(1) ದಿನಾಂಕ :25.1.2006.
2) ಸರ್ಕಾರದ ಪತ್ರ ಸಂಖ್ಯೆ :ಕಾಇ 326 ಎಲ್ಇಟಿ 2005, ದಿನಾಂಕ :17.2.2006.
3) ಕಾರ್ಮಿಕ ಆಯುಕ್ತರು, ಬೆಂಗಳೂರು ಇವರ ಪತ್ರ ಸಂಖ್ಯೆ :ಜಿಜಡ್‌ಟಿ/ಸಿಆರ್–144/2007–08, ದಿನಾಂಕ:15.4.2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ(1) ದಿನಾಂಕ:25.1.2006ರ ಸರ್ಕಾರಿ ಅಧಿಸೂಚನೆಯಲ್ಲಿ ಕರ್ನಾಟಕ ಗೆಜೆಟೆಡ್ ಪ್ರೋಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು 1977ರಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಗೊಂಡ ಒಟ್ಟು 5 ಅಭ್ಯರ್ಥಿಗಳನ್ನು ಸಹಾಯಕ ಕಾರ್ಮಿಕ ಆಯುಕ್ತರು ಹುದ್ದೆಗೆ ನೇಮಕಾತಿ ಆದೇಶ ನೀಡಲಾಗಿತ್ತು. ಸದರಿ ಅಧಿಸೂಚನೆಯಲ್ಲಿ ಈ ಸಹಾಯಕ ಕಾರ್ಮಿಕ ಆಯುಕ್ತರುಗಳನ್ನು 2 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯ ಮೇಲೆ ಇರುತ್ತಾರೆಂದು ಮತ್ತು ಈ ಅವಧಿಯಲ್ಲಿ ಸಹಾಯಕ ಕಾರ್ಮಿಕ ಆಯುಕ್ತರ ಹುದ್ದೆಗೆ ನಿಗಧಿಪಡಿಸಿರುವ ಎಲ್ಲಾ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗಬೇಕೆಂದು ತಿಳಿಸಲಾಗಿತ್ತು. ನೇಮಕಗೊಂಡ 5 ಸಹಾಯಕ ಕಾರ್ಮಿಕ ಆಯುಕ್ತರುಗಳು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ದಿನಾಂಕ:17.2.2006ರ ಸರ್ಕಾರದ ಪತ್ರದಲ್ಲಿ ಎಲ್ಲಾ 5 ಜನ ಸಹಾಯಕ ಕಾರ್ಮಿಕ ಆಯುಕ್ತರುಗಳಿಗೆ ಎರಡು ವರ್ಷಗಳ ತರಬೇತಿಗಾಗಿ ತೈನಾತಿಸಲಾಗಿತ್ತು.

ಕಾರ್ಮಿಕ ಆಯುಕ್ತರು ಮೇಲೆ ಓದಲಾದ ಕ್ರಮಸಂಖ್ಯೆ (3) ದಿನಾಂಕ:15.4.2008ರ ಪತ್ರದಲ್ಲಿ 1999ನೇ ಬ್ಯಾಚ್‌ನ ಪ್ರೋಬೇಷನರಿ ಸಹಾಯಕ ಕಾರ್ಮಿಕ ಆಯುಕ್ತರುಗಳ ಪೈಕಿ ಶ್ರೀ ಗಿರೀಶ್ ಎಸ್. ಪಾಟೀಲ್, ಪ್ರೋಬೇಷನರಿ ಸಹಾಯಕ ಕಾರ್ಮಿಕ ಆಯುಕ್ತರವರು ಯಾವುದೇ ದಾಖಲೆ ಒದಗಿಸಿರುವುದಿಲ್ಲವೆಂದು ತಿಳಿಸಿದ್ದಾರೆ. ಉಳಿದ ಪ್ರೋಬೇಷನರಿ ಸಹಾಯಕ ಕಾರ್ಮಿಕ ಆಯುಕ್ತರುಗಳ ಪರೀಕ್ಷಾರ್ಥಿ ಅವಧಿಯು ಅವರುಗಳ ಹೆಸರುಗಳ ಎದುರಿಗೆ ನಮೂದಿಸಿರುವ ದಿನಾಂಕದಂದು ಮುಕ್ತಾಯವಾಗಿರುತ್ತದೆಂದು ಹಾಗೂ ನಿಗಧಿತ ಇಲಾಖಾ ಪರೀಕ್ಷೆಗಳಲ್ಲಿ (ಕನ್ನಡ ಭಾಷಾ ವಿನಾಯಿತಿ ಸೇರಿ) ಉತ್ತೀರ್ಣರಾಗಿರುತ್ತಾರೆಂದು, ಇವರುಗಳ ವಿರುದ್ದ ಯಾವುದೇ ಇಲಾಖಾ ವಿಚಾರಣೆ ಅಥವಾ ಕ್ರಿಮಿನಲ್ ಮೊಕದ್ದಮೆಗಳು ಬಾಕಿ ಇರುವುದಿಲ್ಲ ಆದ್ದರಿಂದ ಈ ಪತ್ರಾಂಕಿತ ಅಧಿಕಾರಿಗಳು 1977ರ ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥಿ) ನಿಯಮಾವಳಿಯ ನಿಯಮ 5ರನ್ವಯ ಪರೀಕ್ಷಾರ್ಥಿ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವಂತೆ ಕಾರ್ಮಿಕ ಆಯುಕ್ತರು ಕೋರಿರುತ್ತಾರೆ. ಇದನ್ನು ಪರಿಶೀಲಿಸಿದಲ್ಲಿ ಶ್ರೀಮತಿ ಎ.ಜೆ. ಶ್ರೀವಳ್ಳಿ, ಪ್ರೋಬೇಷನರಿ ಸಹಾಯಕ ಕಾರ್ಮಿಕ ಆಯುಕ್ತರು ಇವರ ಕಾರ್ಯನಿರ್ವಹಣಾ ವರದಿ ಲಭ್ಯವಿರುವುದಿಲ್ಲ.

ಕಾರ್ಮಿಕ ಆಯುಕ್ತರು, ಬೆಂಗಳೂರು, ಇವರು 3 ಜನ ಪರಿವೀಕ್ಷಣಾ ಸಹಾಯಕ ಕಾರ್ಮಿಕ ಆಯುಕ್ತರುಗಳ ಬಗ್ಗೆ ನಿಗಧಿತ ಇಲಾಖಾ ಪರೀಕ್ಷೆಗಳಲ್ಲಿ (ಕನ್ನಡ ಭಾಷಾ ವಿನಾಯಿತಿ ಸೇರಿ) ಉತ್ತೀರ್ಣರಾಗಿರುವುದಾಗಿ ಹಾಗೂ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ನಿರ್ವಹಿಸಿರುತ್ತಾರೆ ಎಂದು ಶಿಫಾರಸ್ಸು ಮಾಡಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5(1) ರನ್ವಯ ಈ ಕೆಳಕಂಡ 3 ಜನ ಪರಿವೀಕ್ಷಣಾ ಸಹಾಯಕ ಕಾರ್ಮಿಕ ಆಯುಕ್ತರುಗಳು ತೃಪ್ತಿಕರವಾಗಿ ಪರಿವೀಕ್ಷಣಾ ಅವಧಿಯನ್ನು ಪೂರೈಸಿರುತ್ತಾರೆಂದು ಘೋಷಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶದ ಸಂಖ್ಯೆ:ಕಾಇ 153 ಎಲ್ ಇಟಿ 2008, ಬೆಂಗಳೂರು, ದಿನಾಂಕ:12ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಈ ಕೆಳಕಂಡ ಪರಿವೀಕ್ಷಣಾ ಸಹಾಯಕ ಕಾರ್ಮಿಕ ಆಯುಕ್ತರುಗಳು ಅವರ ಹೆಸರಿನ ಮುಂದೆ ಕಲಂ 4ರಲ್ಲಿ ನಮೂದಿಸಿರುವ ದಿನಾಂಕದಿಂದ ಜಾರಿಗೆ ಬರುವಂತೆ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5(1)ರಡಿ ಘೋಷಿಸಲಾಗಿದೆ.

| ಕ್ರ. ಸಂ. | ಪರಿವೀಕ್ಷಣಾ ಸಹಾಯಕ ಕಾರ್ಮಿಕ ಆಯುಕ್ತರ ಹೆಸರು | ಕರ್ತವ್ಯಕ್ಕೆ ಹಾಜರಾದ ದಿನಾಂಕ | ಪರಿವೀಕ್ಷಣಾ ಅವಧಿ ಮುಕ್ತಾಯವಾದ ದಿನಾಂಕ |
|---|---|---|---|
| 1 | ಶ್ರೀ ರವಿಕುಮಾರ್ ಎಸ್.ಬಿ | 30.1.2006 | 30.1.2008 |
| 2 | ಶ್ರೀ ಉಮೇಶ್ ಎ.ಹೆಚ್. | 30.1.2006 | 30.1.2008 |
| 3 | ಶ್ರೀ ವೆಂಕಟೇಶ್ ಅಪ್ಪಯ್ಯ ಸಿಂಧಿಹಟ್ಟಿ | 3.2.2006 | 3.2.2008 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 931

**ಯು.ಎನ್.ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ

**ವಿಷಯ :** 1998ನೇ ಸಾಲಿನ ಪ್ರೋಬೇಷನರಿ ಸಹಾಯಕ ಕಾರ್ಮಿಕ ಆಯುಕ್ತರುಗಳು ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಅಧಿಸೂಚನೆ ಸಂಖ್ಯೆ :ಕಾಇ 47 ಎಲ್‌ಇಟಿ 2006 ದಿನಾಂಕ :15.5.2006.
2) ಸರ್ಕಾರದ ಪತ್ರ ಸಂಖ್ಯೆ :ಕಾಇ 47 ಎಲ್‌ಇಟಿ 2006, ದಿನಾಂಕ :26.6.2006.
3) ಕಾರ್ಮಿಕ ಆಯುಕ್ತರು, ಬೆಂಗಳೂರು ಇವರ ಪತ್ರ ಸಂಖ್ಯೆ :ಜಿಜಿಡ್‌ಟಿ/ಸಿಆರ್–144/2007–08, ದಿನಾಂಕ :25.6.2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ(1) ದಿನಾಂಕ:15.5.2006ರ ಸರ್ಕಾರಿ ಅಧಿಸೂಚನೆಯಲ್ಲಿ ಕರ್ನಾಟಕ ಗೆಜೆಟೆಡ್ ಪ್ರೋಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು 1977ರಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಗೊಂಡ ಒಟ್ಟು 3 ಅಭ್ಯರ್ಥಿಗಳಿಗೆ ಸಹಾಯಕ ಕಾರ್ಮಿಕ ಆಯುಕ್ತರು ಹುದ್ದೆಗೆ ನೇಮಕಾತಿ ಆದೇಶ ನೀಡಲಾಗಿತ್ತು. ಸದರಿ ಅಧಿಸೂಚನೆಯಲ್ಲಿ ಈ ಅಭ್ಯರ್ಥಿಗಳು 2 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯ ಮೇಲೆ ಇರುತ್ತಾರೆಂದು ಮತ್ತು ಈ ಅವಧಿಯಲ್ಲಿ ಸಹಾಯಕ ಕಾರ್ಮಿಕ ಆಯುಕ್ತರ ಹುದ್ದೆಗೆ ನಿಗಧಿಪಡಿಸಿರುವ ಎಲ್ಲಾ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗಬೇಕೆಂದು ತಿಳಿಸಲಾಗಿತ್ತು. ನೇಮಕಗೊಂಡ 3 ಸಹಾಯಕ ಕಾರ್ಮಿಕ ಆಯುಕ್ತರುಗಳು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ದಿನಾಂಕ:26.6.2006ರ ಸರ್ಕಾರದ ಪತ್ರದಲ್ಲಿ ಎಲ್ಲಾ 3 ಜನ ಸಹಾಯಕ ಕಾರ್ಮಿಕ ಆಯುಕ್ತರುಗಳಿಗೆ ಎರಡು ವರ್ಷಗಳ ತರಬೇತಿಗಾಗಿ ತೈನಾತಿಸಲಾಗಿತ್ತು.

ಕಾರ್ಮಿಕ ಆಯುಕ್ತರು ಮೇಲೆ ಓದಲಾದ ಕ್ರಮಸಂಖ್ಯೆ (3) ದಿನಾಂಕ:25.6.2008ರ ಪತ್ರದಲ್ಲಿ 1998ನೇ ಬ್ಯಾಚ್‌ನ ಪ್ರೋಬೇಷನರಿ ಸಹಾಯಕ ಕಾರ್ಮಿಕ ಆಯುಕ್ತರುಗಳ ಪರೀಕ್ಷಾರ್ಥಿ ಅವಧಿಯು ಅವರುಗಳ ಹೆಸರುಗಳ ಎದುರಿಗೆ ನಮೂದಿಸಿರುವ ದಿನಾಂಕದಂದು ಮುಕ್ತಾಯವಾಗಿರುತ್ತದೆಂದು ಹಾಗೂ ನಿಗಧಿತ ಇಲಾಖಾ ಪರೀಕ್ಷೆಗಳಲ್ಲಿ (ಕನ್ನಡ ಭಾಷಾ ವಿನಾಯಿತಿ ಸೇರಿ) ಉತ್ತೀರ್ಣರಾಗಿರುತ್ತಾರೆಂದು, ಇವರುಗಳ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಅಥವಾ ಕ್ರಿಮಿನಲ್ ಮೊಕದ್ದಮೆಗಳು ಬಾಕಿ ಇರುವುದಿಲ್ಲವೆಂದೂ ಆದ್ದರಿಂದ ಈ ಪತ್ರಾಂಕಿತ ಅಧಿಕಾರಿಗಳು 1977ರ ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಾವಳಿಯ ನಿಯಮ 5ರನ್ವಯ ಪರೀಕ್ಷಾರ್ಥಿ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಕಾರ್ಮಿಕ ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5(1) ರನ್ವಯ ಈ ಕೆಳಕಂಡ 3 ಜನ ಸಹಾಯಕ ಕಾರ್ಮಿಕ ಆಯುಕ್ತರುಗಳು ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶದ ಸಂಖ್ಯೆ:ಕಾಇ 266 ಎಲ್‌ಇಟಿ 2008, ಬೆಂಗಳೂರು, ದಿನಾಂಕ:12ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಈ ಕೆಳಕಂಡ 3 ಮಂದಿ ಸಹಾಯಕ ಕಾರ್ಮಿಕ ಆಯುಕ್ತರುಗಳು ಅವರ ಹೆಸರಿನ ಮುಂದೆ ಕಲಂ 4ರಲ್ಲಿ ನಮೂದಿಸಿರುವ ದಿನಾಂಕದಿಂದ ಜಾರಿಗೆ ಬರುವಂತೆ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5(1)ರಡಿ ಘೋಷಿಸಲಾಗಿದೆ.

| ಕ್ರ.ಸಂ | ಪರಿವೀಕ್ಷಣಾ ಸಹಾಯಕ ಕಾರ್ಮಿಕ ಆಯುಕ್ತರ ಹೆಸರು | ಕರ್ತವ್ಯಕ್ಕೆ ಹಾಜರಾದ ದಿನಾಂಕ | ಪರಿವೀಕ್ಷಣಾ ಅವಧಿ ಮುಕ್ತಾಯವಾದ ದಿನಾಂಕ |
|---|---|---|---|
| 1 | ಶ್ರೀ ಶ್ರೀಪಾದ ಎಸ್. ಬೋಳಶೆಟ್ಟಿ | 25.5.2006 | 25.5.2008 |
| 2 | ಶ್ರೀ ಚಿದಾನಂದ ಎಂ.ಎಸ್ | 25.5.2006 | 22.5.2008 |
| 3 | ಶ್ರೀ ಸಿ.ಹೆಚ್. ಬಾಲಕೃಷ್ಣ | 29.5.2006 | 29.5.2008 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಎನ್.ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ

ಪಿ.ಆರ್. 932

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಶ್ರೀ ಎ.ಕೆ. ಸೋಮಣ್ಣ, ನಿವೃತ್ತ ಅಪರ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಅವರ ವಿರುದ್ಧ ಇಲಾಖಾ ವಿಚಾರಣೆ–ಆರೋಪ ಮುಕ್ತರನ್ನಾಗಿಸಿ ಅಂತಿಮ ಆದೇಶವನ್ನು ಹೊರಡಿಸುವ ಬಗ್ಗೆ.

**ಓದಲಾಗಿದೆ:** 1) ನೋಟೀಸ್ ಸಂಖ್ಯೆ ಸಿಆಸುಇ 190 ಎಸ್‌ಇಎನ್ 2006, ದಿನಾಂಕ :2.1.2008

2) ಶ್ರೀ ಎ.ಕೆ. ಸೋಮಣ್ಣ ನಿವೃತ್ತ ಅಪರ ನಿರ್ದೇಶಕರು, ಕೈಗಾರಿಕೆ ಮತು ವಾಣಿಜ್ಯ ಇಲಾಖೆ ಅವರ ದಿನಾಂಕ :17.1.2008ರ ಉತ್ತರ.

**ಪ್ರಸ್ತಾವನೆ:**

ಶ್ರೀ ಎ.ಕೆ. ಸೋಮಣ್ಣ ನಿವೃತ್ತ ಅಪರ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಅವರು ಯೋಜನಾ ಸಮನ್ವಯಾಧಿಕಾರಿ, ಬಿ.ಎಂ.ಐ.ಸಿ.ಪಿ. ಈ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆಸಲಾದ ಸಭೆಗೆ ಹಾಜರಾಗದೆ ಉಳಿದ ಹಾಗೂ ವ್ಯಾಜ್ಯ ನಿರ್ವಹಣಾಧಿಕಾರಿಯಾಗಿದ್ದೂ ಸಹ ನ್ಯಾಯಾಲಯದ ಮುಂದೆ ಸಲ್ಲಿಸಲಾದ ಪ್ರಮಾಣ ಪತ್ರವನ್ನು ಪ್ರಮಾಣಿಸದೇ ನಿರಾಕರಿಸಿದ ಆರೋಪಗಳಿಗಾಗಿ ಅವರಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ:2.1.2008ರ ನೋಟೀಸ್ ನೀಡಿ ಸಮುಜಾಯಿಷಿಯನ್ನು ಕೇಳಲಾಗಿತ್ತು.

ಆರೋಪಿ ನಿವೃತ್ತ ಅಧಿಕಾರಿ ಶ್ರೀ ಎ.ಕೆ. ಸೋಮಣ್ಣ ನಿವೃತ್ತ ಅಪರ ನಿರ್ದೇಶಕರು ಅವರು ಮೇಲೆ (2)ರಲ್ಲಿ ಓದಲಾದ ದಿನಾಂಕ:17.1.2008ರ ಉತ್ತರವನ್ನು ಸಲ್ಲಿಸಿ ಅವರ ವೈಯಕ್ತಿಕ ಜೀವನದಲ್ಲಿ ನಡೆದ ದುರ್ಘಟನೆಯಿಂದಾಗಿ ಅವರು ವ್ಯಾಕುಲರಾಗಿದ್ದು, ಅದರ ಪರಿಣಾಮವಾಗಿ ಈ ರೀತಿಯಾಗಿದೆಯೇ ಹೊರತು ಇನ್ನಾವುದೇ ದುರ್ನಡತೆ ಇರುವುದಿಲ್ಲ ಎಂದು ತಿಳಿಸಿ, ತಮ್ಮನ್ನು ಆರೋಪ ಮುಕ್ತರನ್ನಾಗಿಸಲು ಕೋರಿದ್ದಾರೆ ಅವರ ಉತ್ತರವನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 190 ಎಸ್‌ಇಎನ್ 2006, ಬೆಂಗಳೂರು, ದಿನಾಂಕ:17ನೇ ಮಾರ್ಚ್ 2009**

ಸರ್ಕಾರವು ಶ್ರೀ ಎ.ಕೆ. ಸೋಮಣ್ಣ ನಿವೃತ್ತ ಅಪರ ನಿರ್ದೇಶಕರು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ಅವರನ್ನು ದಿನಾಂಕ:2.1.2008ರ ನೋಟೀಸ್‌ನಲ್ಲಿ ಮಾಡಲಾದ ಆರೋಪಗಳಿಂದ ಮುಕ್ತರನ್ನಾಗಿಸುತ್ತದೆ. ಒಂದು ವೇಳೆ ಈ ವಿಚಾರಣೆ ನಡೆಯದೇ ಇದ್ದಲ್ಲಿ ಶ್ರೀ ಎ.ಕೆ. ಸೋಮಣ್ಣ ಅವರು ಯಾವ ಸೌಲಭ್ಯಗಳನ್ನು ಪಡೆಯುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ. ಅದಾಗ್ಯೂ ಅವರಿಗೆ ಈ ರೀತಿ ಸನ್ನಿವೇಶಗಳು ಉದ್ಭವಿಸಿರುವುದರ ವಿರುದ್ಧ ತೀವ್ರ ಎಚ್ಚರಿಕೆಯನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3)

ಪಿ.ಆರ್. 934

**ಸಹಕಾರ ಸಚಿವಾಲಯ**

**ವಿಷಯ:** ಕರ್ನಾಟಕ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ:3769/2008 (ಸಿಎಸ್) ರಲ್ಲಿ ಕೋದಂಡರಾಮಸ್ವಾಮಿ ವ್ಯವಸಾಯ ಸೇವಾ ಸಹಕಾರ ಸಂಘ ನಿಯಮಿತ, ಮೈಸೂರು ವಿರುದ್ಧ ರಾಜ್ಯ ಸರ್ಕಾರ ಮತ್ತು ಇತರರು.

**ಓದಲಾಗಿದೆ:** ಸರ್ಕಾರಿ ವಕೀಲರ ಪತ್ರ ದಿನಾಂಕ :25.2.2009

**ಪ್ರಸ್ತಾವನೆ:**

ಉಲ್ಲೇಖಿತ ಸರ್ಕಾರಿ ವಕೀಲರ ಪತ್ರದಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯವು ಮೇಲ್ಕಂಡ ರಿಟ್ ಅರ್ಜಿಯನ್ನು ದಿನಾಂಕ:20.2.2009ರಲ್ಲಿ ಇತ್ಯರ್ಥಪಡಿಸಿದ್ದು, ಈ ರಿಟ್ ಅರ್ಜಿಯ ಸಂಬಂಧ ಗೌರವ ಉಚ್ಚ ನ್ಯಾಯಾಲಯವು ನೀಡಿದ ಆದೇಶಕ್ಕೆ ಪ್ರತಿವಾದಿಗಳು ಸಕಾರಾತ್ಮಕ ಕ್ರಮವನ್ನು ಕೈಗೊಳ್ಳದ ಕಾರಣ ವೆಚ್ಚ ರೂ. 10,000.00ಗಳನ್ನು ಭರಿಸಲು ಆದೇಶಿಸಿರುತ್ತದೆ. ಎಂದೂ ಈ ವೆಚ್ಚವನ್ನು 2, 3 ಮತ್ತು 5ನೇ ಪ್ರತಿವಾದಿಗಳು ಭರಿಸುವ ಬಾಬ್ತು 1ನೇ ಪ್ರತಿವಾದಿಯಾದ ರಾಜ್ಯ ಸರ್ಕಾರವು ಜವಾಬ್ದಾರಿ ನಿಗದಿಪಡಿಸಲು ನಿರ್ದೇಶಿಸಿರುತ್ತದೆ ಎಂದು ತಿಳಿಸಲಾಗಿದೆ. ಈ ಹಿನ್ನಲೆಯಲ್ಲಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಒ 14 ಸಿಡಬ್ಲ್ಯೂಪಿ 2009, ಬೆಂಗಳೂರು, ದಿನಾಂಕ: 17ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಗೌರವ ಉಚ್ಚನ್ಯಾಯಾಲಯವು ವಿಧಿಸಿರುವ ರೂ. 10,000.00 (ಹತ್ತು ಸಾವಿರ ರೂಪಾಯಿ ಮಾತ್ರ) ಗಳು ವೆಚ್ಚದ ಬಾಬ್ತು ರಿಟ್ ಅರ್ಜಿಯಲ್ಲಿನ ಪ್ರತಿವಾದಿಗಳ ಪೈಕಿ 2ನೇ ಪ್ರತಿವಾದಿಯು ರೂ. 4,000.00 3ನೇ ಪ್ರತಿವಾದಿಯು ರೂ. 4,000.00 ಹಾಗೂ 5ನೇ ಪ್ರತಿವಾದಿಯು ರೂ. 2,000,00 ಗಳನ್ನು ಭರಿಸಲು ಆದೇಶಿಸಲಾಗಿದೆ. ಈ ವೆಚ್ಚವನ್ನು ಗೌರವ ಉಚ್ಚ ನ್ಯಾಯಾಲಯದಲ್ಲಿ ದಿನಾಂಕ:20.3.2009ರ ಒಳಗಾಗಿ ಠೇವಣಿಸುವಂತೆ ಆದೇಶಿಸಿದೆ. ಈ ಸಂಬಂಧ ಸರ್ಕಾರಿ ವಕೀಲರಿಗೆ/ಸರ್ಕಾರಕ್ಕೆ ವರದಿ ಸಲ್ಲಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 946

**ಎನ್.ಸಿ. ಮುನಿಯಪ್ಪ**

ಕಾರ್ಯದರ್ಶಿ, ಸಹಕಾರ ಇಲಾಖೆ

**ವಿಷಯ:** ಶ್ರೀ ರಾಯ್‌ಚಂದ್ ಜೈನ್, ವರ್ತಕರ ಪ್ರತಿನಿಧಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಸುರಪುರ ಇವರ ಸದಸ್ಯತ್ವವನ್ನು ರದ್ದುಪಡಿಸುವ ಕುರಿತು.

**ಓದಲಾಗಿದೆ:**
1) ನಿರ್ದೇಶಕರು, ಕೃಷಿ ಮಾರಾಟ ಇಲಾಖೆ ಇವರ ಕಡತ ಸಂಖ್ಯೆ :ಕೃಮಾಇ/99/ಚುನಾವಣೆ/2008.
2) ಸರ್ಕಾರದ ತಿಳುವಳಿಕೆ ನೋಟೀಸು ಸಂಖ್ಯೆ :ಸಇ 14 ಎಂಆರ್ಇ 2008 ದಿನಾಂಕ :1.2.2008
3) ಶ್ರೀ ರಾಯ್‌ಚಂದ್ ಜೈನ್, ವರ್ತಕರ ಪ್ರತಿನಿಧಿ ಹಾಗೂ ಸದಸ್ಯರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಸುರಪುರ ಇವರ ಲಿಖಿತ ಹೇಳಿಕೆ ದಿನಾಂಕ :19.2.2008.
4) ನಿರ್ದೇಶಕರು, ಕೃಷಿ ಮಾರಾಟ ಇಲಾಖೆ ಇವರ ಪತ್ರ ಸಂಖ್ಯೆ :ಕೃಮಾಇ/99/ಚುನಾವಣೆ/2008 ದಿನಾಂಕ :1.1.2009.

**ಪ್ರಸ್ತಾವನೆ:**

ಶ್ರೀ ರಾಯ್‌ಚಂದ್ ಜೈನ್, ವರ್ತಕರ ಸಂಘದ ಪ್ರತಿನಿಧಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಸುರಪುರ ಇವರು ಕೃಷಿ ಮಾರಾಟ ಇಲಾಖೆಯ ಅಧಿಕಾರಿಗಳಾದ ಶ್ರೀ ಎಸ್. ನಂಜಯ್ಯ ಮಾರುಕಟ್ಟೆ ಅಧಿಕಾರಿ ಹಾಗೂ ಶ್ರೀ ಎನ್. ರಾಮಸುಬ್ಬಯ್ಯ, ಉಪ ನಿರ್ದೇಶಕರು, ಕಾನೂನು ಜಾರಿಕೋಶ, ಉತ್ತರ ವಲಯ, ಹುಬ್ಬಳ್ಳಿ ಇವರು ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಕಾಯ್ದೆ 1966 ರನ್ವಯ ಕಾನೂನು ಜಾರಿಕೋಶದ ಕರ್ತವ್ಯಗಳನ್ನು ನಿರ್ವಹಿಸುತ್ತಿದ್ದಾಗ ಅವರುಗಳ ಮೇಲೆ ಹಲ್ಲೆ ನಡೆಸಿರುವುದು ಹಾಗೂ ಈ ಕುರಿತಾಗಿ ಆರಕ್ಷಕ ನಿರೀಕ್ಷಕರು ಸುರಪುರ ಪೊಲೀಸ್ ಠಾಣೆಯಲ್ಲಿ ದೂರು ದಾಖಲಾಗಿರುವ ಹಿನ್ನೆಲೆಯಲ್ಲಿ ಇವರ ದುರ್ನಡತೆಗಾಗಿ ಶಿಸ್ತು ಕ್ರಮ ಕೈಗೊಳ್ಳಲು ಮೇಲೆ (1) ರಲ್ಲಿ ಓದಲಾದ ಕೃಷಿ ಮಾರಾಟ ಇಲಾಖೆಯ ಕಡತದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿತ್ತು.

ಶ್ರೀ ರಾಯ್‌ಚಂದ್ ಜೈನ್, ವರ್ತಕರ ಸಂಘದ ಪ್ರತಿನಿಧಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಸುರಪುರ ಇವರಿಗೆ ಈ ಬಗ್ಗೆ ಮೇಲೆ [2]ರಲ್ಲಿ ಓದಲಾದ ಸರ್ಕಾರದ ತಿಳುವಳಿಕೆ ನೋಟೀಸು ಜಾರಿ ಮಾಡಿ 15 ದಿನಗಳ ಒಳಗೆ ಅವರ ಲಿಖಿತ ಹೇಳಿಕೆ ಸಲ್ಲಿಸುವಂತೆ ಸೂಚಿಸಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ರಾಯ್‌ಚಂದ್ ಜೈನ್, ವರ್ತಕರ ಸಂಘದ ಪ್ರತಿನಿಧಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಸುರಪುರ ರವರು ಲಿಖಿತ ಹೇಳಿಕೆಯನ್ನು ನೀಡಿ ಆರೋಪಗಳನ್ನು ಅಲ್ಲಗಳೆದು ಕೃಷಿ ಮಾರಾಟ ಇಲಾಖೆಯ ಕಾನೂನು ಜಾರಿಕೋಶದ ಅಧಿಕಾರಿಗಳ ವಿರುದ್ಧ ಕ್ರಮ ಕೈಗೊಳ್ಳಬೇಕೆಂದು ವಿನಂತಿಸಿದ್ದರು.

ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು ರವರು ಶ್ರೀ ರಾಯ್‌ಚಂದ್ ಜೈನ್, ವರ್ತಕರ ಸಂಘದ ಪ್ರತಿನಿಧಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಸುರಪುರ ರವರು ಸರ್ಕಾರದ ತಿಳುವಳಿಕೆ ನೋಟೀಸಿಗೆ ಸಲ್ಲಿಸಿದ ಲಿಖಿತ ಹೇಳಿಕೆಗಳಿಗೆ ಕಂಡಿಕೆವಾರು ಉತ್ತರಗಳನ್ನು ನೀಡಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಸುರಪುರ ಪ್ರಾಂಗಣದಲ್ಲಿರುವ ರಾವತ್ ಮುಲ್ಲಾ ಅಂಡ್ ಸನ್ಸ್, ದಲ್ಲಾಲರು ಹಾಗೂ ಉದಯ್ ಟ್ರೇಡಿಂಗ್ ಕಂಪನಿರವರಿಗೆ ಸೇರಿದ ಅಂಗಡಿ–ವ–ಗೋದಾಮು ಸಂಖ್ಯೆ 1ರ ಮುಂದೆ ನಿಯಂತ್ರಿತ ಹುಟ್ಟುವಳಿಯಾದ ಸೂರ್ಯಪಾನ ಬೀಜವನ್ನು ಲಾರಿಗೆ ತುಂಬುತ್ತಿರುವ ಸಂದರ್ಭದಲ್ಲಿ ಕಾನೂನು ಜಾರಿಕೋಶದ ಅಧಿಕಾರಿಗಳು ದಾಖಾಲಾತಿಗಳನ್ನು ಕೇಳಿದಾಗ ದಾಖಲಾತಿಗಳನ್ನು ನಿರ್ವಹಿಸಿಲ್ಲವೆಂದು ಇದು ನಿಯಮಬಾಹಿರವಾಗಿರುವುದಾಗಿ ಸದರಿ ಗೋದಾಮಿನ ಭೌತಿಕ ದಾಸ್ತಾನು ದೃಢೀಕರಿಸಲು ಮುಂದಾದಾಗ ಶ್ರೀ ಕಿಶೋರ್‌ಚಂದ್ರ ಜೈನ್, ವರ್ತಕ ಸಂಘದ ಅಧ್ಯಕ್ಷರು ಹಾಗೂ ಶ್ರೀ ರಾಯ್‌ಚಂದ್ ಜೈನ್, ವರ್ತಕ ಸಂಘದ ಪ್ರತಿನಿಧಿ ಹಾಗೂ ಸಮಿತಿ ಸದಸ್ಯರು ಧಾವಿಸಿ ಏಕಾಏಕಿ ಅಧಿಕಾರಿಗಳಿಗೆ ಅಸಭ್ಯವಾಗಿ ಮಾತನಾಡಿ ಅವಾಚ್ಯ ಶಬ್ದಗಳಿಂದ ನಿಂಧಿಸಿ, ಕಾಗದ ಪತ್ರಗಳನ್ನು ಹರಿದು ಹಾಕಿ ಹಲ್ಲೆ ಮಾಡಿ ಸರ್ಕಾರದ ಕೆಲಸಕ್ಕೆ ಅಡ್ಡಿ ಉಂಟು ಮಾಡಿರುತ್ತಾರೆ. ಈ ದಾಂಧಲೆಯಿಂದ ರಕ್ಷಣಾತ್ಮಕ ದೃಷ್ಟಿಯಿಂದ ಸುರಪುರ ಪೊಲೀಸ್ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ:208/2007 ದಿನಾಂಕ:4.11.2007 ರಂದು ದೂರು ದಾಖಲಾಗಿದ್ದು. ಈ ಸಂಬಂಧ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ಸಿ.ಸಿ. ಸಂಖ್ಯೆ:43/2007 ದಾಖಲಾಗಿದ್ದು ನ್ಯಾಯಾಲಯದಲ್ಲಿ ಪರಿಶೀಲನೆಯಲ್ಲಿದೆ. ಈ ಹಿನ್ನೆಲೆಯಲ್ಲಿ ವರ್ತಕರ ದುರ್ನಡತೆ ಸಾಬೀತಾಗಿರುವುದರಿಂದ ನಿಯಮಾನುಸಾರ ಕ್ರಮ ಕೈಗೊಳ್ಳಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ ಶ್ರೀ ರಾಯ್‌ಚಂದ್ ಜೈನ್, ವರ್ತಕರ ಸಂಘದ ಪ್ರತಿನಿಧಿ ಹಾಗೂ ಸದಸ್ಯರು, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಸುರಪುರ ಇವರ ದುರ್ವರ್ತನೆ ನಡೆಸಿರುವ ಆರೋಪವು ಸಾಬೀತಾಗಿರುವುದರಿಂದ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಕಾಯ್ದೆ 1966ರ ಪ್ರಕರಣ 129 ರ ಪ್ರಕಾರ ಸಮಿತಿ ಸದಸ್ಯತ್ವವನ್ನು ವಜಾ ಮಾಡಲು ತೀರ್ಮಾನಿಸಿದ ಸರ್ಕಾರವು ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸ ಇ 14 ಎಂಆರ್‌ಇ 2008, ಬೆಂಗಳೂರು, ದಿನಾಂಕ:19ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಪ್ರಕರಣ 129ರಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ರಾಯ್‌ಚಂದ್ ಜೈನ್, ವರ್ತಕರ ಸಂಘದ ಪ್ರತಿನಿಧಿ ಹಾಗೂ ಸದಸ್ಯರು, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಸುರಪುರ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸುರಪುರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಸದಸ್ಯತ್ವದಿಂದ ವಜಾ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 947

**ಸಿ.ಕೆ. ವಾಸುದೇವ ಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಆಯುಷ್ (ಆಯುರ್ವೇದ, ಯೋಗ, ಯುನಾನಿ ಮತ್ತು ಹೋಮಿಯೋಪತಿ) ಪದವಿ ಕೋರ್ಸುಗಳ ವ್ಯಾಸಂಗಕ್ಕೆ ಪ್ರವೇಶ ಪರೀಕ್ಷೆಯನ್ನು ರದ್ದುಪಡಿಸುವ ಆದೇಶವನ್ನು ತಡೆ ಹಿಡಿಯುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ:ಆಕುಕ 47 ಪಿಟಿಡಿ 2009, ದಿನಾಂಕ:5.3.2009.

**ಪ್ರಸ್ತಾವನೆ:**

2009–10ನೇ ಸಾಲಿನಿಂದ ಆಯುಷ್ (ಆಯುರ್ವೇದ, ಯೋಗ, ಯುನಾನಿ, ಮತ್ತು ಹೋಮಿಯೋಪತಿ) ಪದವಿ ಕೋರ್ಸುಗಳ ವ್ಯಾಸಂಗದ ಪ್ರವೇಶಕ್ಕೆ ಜಾರಿಯಲ್ಲಿರುವ ಸಾಮಾನ್ಯ ಪ್ರವೇಶ ಪರೀಕ್ಷೆಯನ್ನು ((CET) ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ, ಮುಂದಿನ ಆದೇಶದವರೆಗೆ ದ್ವಿತೀಯ ಪಿಯುಸಿ/12ನೇ ತರಗತಿಯಲ್ಲಿ ಕನಿಷ್ಠ ಶೇ.50ರಷ್ಟು ಅಂಕಗಳನ್ನು ಪಡೆದಿರುವ ವಿದ್ಯಾರ್ಥಿಗಳಿಗೆ ಮೆರಿಟ್ ಆಧಾರದ ಮೇಲೆ ಆಯುಷ್ (ಆಯುರ್ವೇದ, ಯೋಗ, ಯುನಾನಿ, ಮತ್ತು ಹೋಮಿಯೋಪತಿ) ಪದವಿ ಕೋರ್ಸುಗಳ ವ್ಯಾಸಂಗಕ್ಕೆ ಸೀಟುಗಳನ್ನು ಕರ್ನಾಟಕ ಪರೀಕ್ಷಾ ಪ್ರಾಧಿಕಾರದಿಂದ ಹಂಚಿಕೆ ಮಾಡಲು ಮೇಲೆ ಓದಲಾದ ಸರ್ಕಾರದ ಆದೇಶದಲ್ಲಿ ಅನುಮೋದನೆ ನೀಡಲಾಗಿತ್ತು.

ವಿಷಯವನ್ನು ಪುನರ್ ಪರಿಶೀಲಿಸಿದ ನಂತರ ಸರ್ಕಾರದ ಆದೇಶ ಸಂಖ್ಯೆ:ಆಕುಕ 47 ಪಿಟಿಡಿ 2009, ದಿನಾಂಕ:5.3.2009ನ್ನು ತಡೆ ಹಿಡಿಯಲು ಸರ್ಕಾರವು ತೀರ್ಮಾನಿಸಿ, ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆಕುಕ 47 ಪಿಟಿಡಿ 2009, ಬೆಂಗಳೂರು, ದಿನಾಂಕ:21ನೇ ಮಾರ್ಚ್ 2009**

ಸರ್ಕಾರದ ಆದೇಶ ಸಂಖ್ಯೆ ಆಕುಕ 47 ಪಿಟಿಡಿ 2009, ದಿನಾಂಕ:5.3.2009ನ್ನು ಮುಂದಿನ ಆದೇಶದವರೆಗೆ ಈ ಮೂಲಕ ತಡೆ ಹಿಡಿಯಲಾಗಿದೆ. (kept in abeyance).

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಹಾಲಕ್ಷ್ಮಮ್ಮ**

ಪಿ.ಆರ್. 948

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾರತೀಯ ವೈದ್ಯ ಪದ್ಧತಿ)

**ಸಹಕಾರ ಸಚಿವಾಲಯ**

**ವಿಷಯ:** ಜವಹರ್ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಬೆಂಗಳೂರು ಇದರ ಆಡಳಿತಗಾರರ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1) ಸಹಕಾರ ಸಂಘಗಳ ಅಪರ ನಿಬಂಧಕರ ಆದೇಶ ಸಂಖ್ಯೆ :ಹೆಚ್ಎಸ್‌ಜಿ–1/117(ಎ) ಹೆಚ್ಎಸ್ಎಸ್/2008–09, ದಿನಾಂಕ :2.12.2008 ಮತ್ತು 3.12.2008.

2) ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ:ಹೆಚ್ಎಸ್‌ಜಿ–1 :117(ಎ): ಹೆಚ್‌ಹೆಚ್ಎಸ್ :2008–09, ದಿನಾಂಕ :7.2.2009.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ಸಹಕಾರ ಸಂಘಗಳ ಅಪರ ನಿಬಂಧಕರು ದಿನಾಂಕ:27.1.2007ರಂದು ಜವಹರ್ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ ಇದರ ಆಡಳಿತ ಮಂಡಳಿಯನ್ನು ಆರು ತಿಂಗಳ ಅವಧಿಗೆ ರದ್ದುಗೊಳಿಸಿ ಆಡಳಿತಗಾರರನ್ನು ನೇಮಿಸಿದ್ದು ಆಡಳಿತಗಾರರ ಅವಧಿಯನ್ನು ದಿನಾಂಕ:26.7.2008ರವರೆಗೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 30(1)ರಡಿ ಸಹಕಾರ ಸಂಘಗಳ ನಿಬಂಧಕರಿಗೆ ದತ್ತವಾದ ಅಧಿಕಾರದ ಮೇರೆಗೆ ವಿಸ್ತರಿಸಿ ಆದೇಶಿಸಿರುತ್ತಾರೆ. ಈ ಕೆಳಕಂಡ ಸಮಸ್ಯೆಗಳ ಕಾರಣದಿಂದ ಮೇಲೆ ಓದಲಾದ (2)ರ ಪತ್ರದಲ್ಲಿ ಆಡಳಿತಗಾರರ ಅವಧಿಯನ್ನು ದಿನಾಂಕ:27.7.,2008 ರಿಂದ ದಿನಾಂಕ:26.7.2009ರವರೆಗೆ ವಿಸ್ತರಿಸಲು ಸಹಕಾರ ಸಂಘಗಳ ಅಪರ ನಿಬಂಧಕರು ಸರ್ಕಾರವನ್ನು ಕೋರಿರುತ್ತಾರೆ.

1. ಚುನಾವಣೆ ಹೊರತು, ಸಂಘದ ವಾರ್ಷಿಕ ಸಾಮಾನ್ಯ ಸಭೆಯನ್ನು ನಡೆಸಲೂ ಸಹ ಹಣಕಾಸು ಇರದೆ ತೊಂದರೆಯಾಗಿರುವುದು.
2. ಅರ್ಹ ಸದಸ್ಯರ ಪಟ್ಟಿಯನ್ನು ಈವರೆವಿಗೆ ತಯಾರಿಸದೇ ಇರುವುದು. ಇದರ ತಯಾರಿಕೆಗೆ ಸಂಘದಲ್ಲಿ ಹಣ ಹಾಗೂ ಸಿಬ್ಬಂದಿ ಇರದೇ ಇರುವುದು.
3. ಸಂಘದ ಸದಸ್ಯರಿಗೆ ಗುರುತಿನ ಚೀಟಿಯನ್ನು ನೀಡಲು ಹಣ ಇಲ್ಲದೆ ಇರುವುದು.
4. ಬೆಂಗಳೂರು ಜಿಲ್ಲಾ & ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿಯಮಿತ ಬೆಂಗಳೂರು ಇದಕ್ಕೆ ಸಂಘದಿಂದ ಮರುಪಾವತಿಸಬೇಕಾಗಿರುವ ಸಾಲದ ಬೃಹತ್ ಹೊರೆ ಇರುವುದು.
5. ಸಂಘದ ಜಮೀನುಗಳ ಬಗ್ಗೆ ತಕರಾರು ವ್ಯಾಜ್ಯಗಳು ಇರುವುದು.
6. ಸಂಘದ ಲೆಕ್ಕಪತ್ರಗಳು 1995–96ರಿಂದ ಈವರೆಗೆ ಲೆಕ್ಕಪರಿಶೋಧನೆಯಾಗದೇ ಇರುವುದು
7 ಸಂಘದ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿರುವುದು.

ಸಂಘದ ಆಡಳಿತಗಾರರ ಅವಧಿಯನ್ನು ದಿನಾಂಕ:27.7.2008ರಿಂದ ದಿನಾಂಕ:26.7.2009ರವರೆವಿಗೆ ಒಂದು ವರ್ಷದ ಅವಧಿಗೆ ವಿಸ್ತರಿಸಲು ಕೋರಿದ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸಿಒ 35 ಸಿಎಲ್ಎಂ 2009, ಬೆಂಗಳೂರು, ದಿನಾಂಕ:18ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಸಂಗತಿಗಳ ಹಿನ್ನೆಲೆಯಲ್ಲಿ ಜವಹರ್ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಬೆಂಗಳೂರು ಇದರ ಆಡಳಿತಗಾರರ ಅವಧಿಯಲ್ಲಿ ದಿನಾಂಕ:27.7.2008ರಿಂದ ದಿನಾಂಕ:26.7.2009ರವರೆಗೆ ವಿಸ್ತರಿಸಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ ಪ್ರಕರಣ 30(1) ಈ ಕೆಳಕಂಡ ಮಾರ್ಪಾಟುಗಳೊಂದಿಗೆ ಜವಹರ್ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಬೆಂಗಳೂರು ಇದಕ್ಕೆ ಅನ್ವಯವಾಗತಕ್ಕದ್ದೆಂದು ನಿರ್ದೇಶಿಸುತ್ತದೆ ಎಂದರೆ:

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 30 ಉಪಪ್ರಕರಣ (1)ರಲ್ಲಿನ **"ಒಂದು ವರ್ಷ"** ಎಂಬ ಪದಗಳಿಗೆ ಬದಲಾಗಿ **"ಇಪ್ಪತ್ತನಾಲ್ಕು ತಿಂಗಳು"** ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:** 2) ಪ್ರಕರಣ 30 ಉಪ–ಪ್ರಕರಣ (1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ:26.7.2009 ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 30 ಉಪ–ಪ್ರಕರಣ (1)ರಲ್ಲಿನ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ

ಪಿ.ಆರ್. 949

**ಶಿಕ್ಷಣ ಸಚಿವಾಲಯ**

**ವಿಷಯ:** ಬಿಜಾಪುರದ ಸರ್ಕಾರಿ ಪಾಲಿಟೆಕ್ನಿಕ್‌ಗೆ ಆಡಳಿತ ಕಛೇರಿ ಬ್ಲಾಕ್ ಕಟ್ಟಡ ನಿರ್ಮಾಣದ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:**
1. ನಿರ್ದೇಶಕರು ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ : ಡಿಟಿಇ/34/ಬಿ.ಎಲ್.ಡಿ 2008/ದಿನಾಂಕ :12/13–02–2009.
2. ಮುಖ್ಯ ಅಭಿಯಂತರರು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಸಂಪರ್ಕ ಮತ್ತು ಕಟ್ಟಡಗಳು [ಉತ್ತರ], ಧಾರವಾಡ ಇವರ ಪತ್ರ ಸಂಖ್ಯೆ :ಸಿಇಎನ್/ತಾಂಸ–2/ಆಯವ್ಯಯ/ಕಟ್ಟಡ/ಅಅ/ವಿಜಾಪುರ/12030, ದಿನಾಂಕ :21.1.2009

**ಪ್ರಸ್ತಾವನೆ:**

(1) ಮೇಲೆ ಓದಲಾದ ಪತ್ರದಲ್ಲಿ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರು, ಬಿಜಾಪುರ ಸರ್ಕಾರಿ ಪಾಲಿಟೆಕ್ನಿಕ್ ಕಟ್ಟಡದ ಭಾಗಶಃ ನೆಲಮಹಡಿ ಕಟ್ಟಡ [ಆಡಳಿತ ಕಛೇರಿ ಕಟ್ಟಡ] ಕಾಮಗಾರಿಯ ಅಂದಾಜು ಮೊತ್ತ 50.00 ಲಕ್ಷರೂಗಳಿಗೆ, 2008–09ನೇ ಸಾಲಿಗೆ ಲೆಕ್ಕಶೀರ್ಷಿಕೆ 4059ರಲ್ಲಿ 15.00 ಲಕ್ಷರೂಗಳನ್ನು ಒದಗಿಸಿರುವುದಾಗಿ ಮುಖ್ಯ ಅಭಿಯಂತರರು, ಲೋಕೋಪಯೋಗಿ ಇಲಾಖೆರವರ ಮೇಲೆ ಓದಲಾದ (2)ರ ಪತ್ರದಲ್ಲಿ ತಿಳಿಸಿರುವುದಾಗಿ ತಿಳಿಸಿ, ಸದರಿ ಅಂದಾಜು ಪಟ್ಟಿ ಮತ್ತು ನಕ್ಷೆಯನ್ನು ಮುಖ್ಯ ಅಭಿಯಂತರರು, ಲೋಕೋಪಯೋಗಿ ಇಲಾಖೆ ಧಾರವಾಡರವರಿಂದ ಸ್ವೀಕರಿಸಿ ಅದಕ್ಕೆ ಆಡಳಿತಾತ್ಮಕ ಅನುಮೋದನೆ ನೀಡಲು ಅನುಮತಿ ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

(2) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ 36 ಯೋಸಕ 2009, ಬೆಂಗಳೂರು, ದಿನಾಂಕ:11ನೇ ಮಾರ್ಚ್ 2009**

**[ಇಡಿ:36:ಸ್ವೀಮರ (ಯುನಿಕ್) 2009, ದಿನಾಂಕ:11.3.2009]**

(3) ಬಿಜಾಪುರದ ಸರ್ಕಾರಿ ಪಾಲಿಟೆಕ್ನಿಕ್ ಕಟ್ಟಡದ ಭಾಗಶಃ ನೆಲಮಹಡಿ ಕಟ್ಟಡ [ಆಡಳಿತ ಕಛೇರಿ ಕಟ್ಟಡಗಳ] ಕಾಮಗಾರಿಯ 50.00 ಲಕ್ಷ ರೂಗಳ [ಐವತ್ತು ಲಕ್ಷ ರೂಪಾಯಿಗಳು ಮಾತ್ರ] ಅಂದಾಜು ಮತ್ತು ನಕ್ಷೆಗೆ ಕಾಮಗಾರಿಯನ್ನು ಪ್ರಚಲಿತವಿರುವ ಕರ್ನಾಟಕ ಪಾರದರ್ಶಕತೆ ಅಧಿನಿಯಮದನ್ವಯ ಕೈಗೊಳ್ಳುವ ಷರತ್ತನ್ನು ವಿಧಿಸಿ, ಆಡಳಿತಾತ್ಮಕ ಅನುಮೋದನೆ ನೀಡಿ, ಮೂಲ ಅಂದಾಜು ಮತ್ತು ನಕ್ಷೆಯನ್ನು ಲೋಕೋಪಯೋಗಿ ಇಲಾಖೆಗೆ ಹಿಂತಿರುಗಿಸಲು, ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಸರ್ಕಾರವು ಅನುಮತಿ ನೀಡಿದೆ.

(4) ಕಾಮಗಾರಿಯ ಗುಣಮಟ್ಟದ ಬಗ್ಗೆ ಇಲಾಖೆಯ ಅಧಿಕಾರಿಗಳು ಆಗಿಂದಾಗ್ಗೆ ಪರಿಶೀಲಿಸಲು ಸೂಚಿಸಿದೆ.

(5) ಸದರಿ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಶಿ.ಇ. 493 :ಐ.ಎಫ್ (ಬಿಎ) 2008/ದಿನಾಂಕ:21.2.2008ರಲ್ಲಿನ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ.ಎಫ್. ಮಾಗಿ**

ಪಿ.ಆರ್. 950

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಯೋಜನೆ)

**ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ**

**ವಿಷಯ:** ಶ್ರೀ ಪಿ.ಎಸ್. ಇಟಕಂಪಳ್ಳಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೀದರ್ ಇವರ ವಿರುದ್ಧದ ಇಲಾಖಾ ವಿಚಾರಣೆ ಕುರಿತು–ಅಂತಿಮ ಆದೇಶ.

**ಓದಲಾಗಿದೆ:**
1. ಜಿಲ್ಲಾಧಿಕಾರಿಗಳು, ಬೀದರ್ ಕಚೇರಿಯ ಆದೇಶ ಸಂಖ್ಯೆ:ಕಂ/ಸಿಬ್ಬಂದಿ/ಸಿಆರ್/ಜಿಎ/2008–09/4770 ದಿ:16.8.208.
2. ಜಿಲ್ಲಾಧಿಕಾರಿಗಳು, ಬೀದರ್, ಕಚೇರಿಯ ಆದೇಶ ಸಂಖ್ಯೆ:ಕಂ/ಸಿಬ್ಬಂದಿ/ಸಿಆರ್/ಜಿಎ/2008–09/5598 ದಿ:16.8.2008
3. ಸರ್ಕಾರದ ಆದೇಶ ಸಂಖ್ಯೆ:ಮಮಇ 460 ಎಸ್‌ಜೆಡಿ 2008 ದಿ:23.12.2008.
4. ಸರ್ಕಾರದ ಆದೇಶ ಸಂಖ್ಯೆ:ಮಮಇ 460 ಎಸ್‌ಜೆಡಿ 2008 (ಭಾಗ–1) ದಿ:3.1.2009
5. ಶ್ರೀ ಪಿ.ಎಸ್ .ಇಟಕಂಪಳ್ಳಿ, ನಿರೂಪಣಾಧಿಕಾರಿ, ಸಹಾಯಕ ನಿರ್ದೇಶಕರ ಕಛೇರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೀದರ್ ರವರ ಮನವಿ ದಿ:5.1.2009.

**ಪ್ರಸ್ತಾವನೆ:**

ಬೀದರ್ ನಗರದಲ್ಲಿ ನಡೆಯುತ್ತಿರುವ ಅಂಗನವಾಡಿ ಕೇಂದ್ರಗಳ ಕಾರ್ಯನಿರ್ವಹಣೆ ಬಗ್ಗೆ ಸಾರ್ವಜನಿಕರಿಂದ ಹಾಗೂ ಚುನಾಯಿತ ಪ್ರತಿನಿಧಿಗಳಿಂದ ಅನೇಕ ಬಾರಿ ದೂರುಗಳು ಬಂದ ಹಿನ್ನೆಲೆಯಲ್ಲಿ, ಅಂಗನವಾಡಿ ಕೇಂದ್ರಗಳ ತಪಾಸಣೆಯನ್ನು

ಹಿರಿಯ ಅಧಿಕಾರಿಗಳಿಂದ ನಡೆಸಿ ಕೇಂದ್ರಗಳ ತಪಾಸಣೆ ಬಳಿಕ ನ್ಯೂನತೆಗಳು ಇರುವುದು ವರದಿಯಾಗಿರುವ ಕುರಿತು ದಿ:16.8.2008 ರ ಜನಸ್ಪಂದನ ಸಮಿತಿ ಸಭೆಯಲ್ಲಿ ವಿವರವಾಗಿ ಚರ್ಚಿಸಿ ತಪಾಸಣೆ ತಂಡದವರ ಅಭಿಪ್ರಾಯದ ಪ್ರಕಾರ ಅಂಗನವಾಡಿ ಕೇಂದ್ರಗಳ ಕಾರ್ಯನಿರ್ವಹಣೆ ತೃಪ್ತಿಕರವಾಗಿಲ್ಲದಿರುವುದನ್ನು ಮನಗಂಡು, ಅನೇಕ ಅಂಗನವಾಡಿ ಕೇಂದ್ರಗಳಿಗೆ ವರ್ಷ ಕಳೆದರು ಶ್ರೀ ರಾಮಕೃಷ್ಣ ಟಿ. ಪಡಗಣ್ಣನವರ, ಉಪ ನಿರ್ದೇಶಕರು ಹಾಗೂ ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೀದರ್ ಮತ್ತು ಶ್ರೀ ಪಿ.ಎಸ್. ಇಟಕಂಪಳ್ಳಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಬೀದರ್ ಇವರುಗಳು ನಿಯಮಿತವಾಗಿ ಬೇಟಿ ನೀಡಿ ಮೇಲ್ವಿಚಾರಣೆ ಮಾಡದೆ ಇರುವುದರಿಂದ ಈ ಕಾರ್ಯಕ್ರಮವು ಒಂದು ಖೋಟಾ ಕಾರ್ಯಕ್ರಮವಾಗಿ ಪರಿಗಣಿಸಿದ್ದು, ಮಕ್ಕಳು ಹಾಗೂ ಸ್ತ್ರೀಯರಿಗಾಗಿ ರೂಪಿಸಿದ ಕಾರ್ಯಕ್ರಮವನ್ನು ಬುಡಮೇಲು ಮಾಡಿದಂತಾಗಿರುವುದು ಮೇಲ್ನೋಟಕ್ಕೆ ಕಂಡು ಬಂದ ಹಿನ್ನೆಲೆಯಲ್ಲಿ ಜಿಲ್ಲಾಧಿಕಾರಿ, ಬೀದರ್ ರವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿ:16.8.2008 ರ ಆದೇಶದಲ್ಲಿ ಶ್ರೀ ರಾಮಕೃಷ್ಣ ಟಿ. ಪಡಗಣ್ಣನವರ, ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೀದರ್ ಹಾಗೂ ಮೇಲೆ ಕ್ರಮ ಸಂಖ್ಯೆ(2)ರಲ್ಲಿ ಓದಲಾದ ದಿ:16.8.2008ರ ಆದೇಶದಲ್ಲಿ ಶ್ರೀ ಪಿ.ಎಸ್.ಇಟಕಂಪಳ್ಳಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಬೀದರ್, ಇವರುಗಳನ್ನು ಅಮಾನತ್ತುಗೊಳಿಸಿ ಆದೇಶ ಹೊರಡಿಸಿರುತ್ತಾರೆ.

ಜಿಲ್ಲಾಧಿಕಾರಿ, ಬೀದರ್ ರವರು ಅಮಾನತ್ತುಗೊಳಿಸಿ ಹೊರಡಿಸಿರುವ ದಿ:16.8.2008ರ ಆದೇಶವನ್ನು ಪ್ರಶ್ನಿಸಿ ಶ್ರೀ ರಾಮಕೃಷ್ಣ ಟಿ. ಪಡಗಣ್ಣನವರ, ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೀದರ್ ರವರು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಂಖ್ಯೆ:4069/2008 ರಲ್ಲಿ ಮೊಕದ್ದಮೆ ಹೂಡಿ, ಜಿಲ್ಲಾಧಿಕಾರಿ, ಬೀದರ್ ರವರು ಅಮಾನತ್ತುಗೊಳಿಸಿ ಹೊರಡಿಸಿರುವ ದಿ:16.8.2008ರ ಆದೇಶವನ್ನು ರದ್ದುಗೊಳಿಸುವಂತೆ ಕೋರಲಾಗಿದ್ದು, ಸದರಿ ಪ್ರಕರಣವನ್ನು ಮಾನ್ಯ ನ್ಯಾಯಮಂಡಳಿಯು ದಿ:13.10.2008 ರಂದು ವಿಚಾರಣೆ ನಡೆಸಿ ಶಿಸ್ತು ಪ್ರಾಧಿಕಾರವಲ್ಲದ ಹಾಗೂ ಜಿಲ್ಲಾಧಿಕಾರಿಗಳಿಗೆ ಗ್ರೂಪ್ 'ಎ' ಅಧಿಕಾರಿಯನ್ನು ಅಮಾನತ್ತುಗೊಳಿಸಲು ಅಧಿಕಾರವಿಲ್ಲದಿದ್ದರೂ ಸಹ ಜಿಲ್ಲಾಧಿಕಾರಿಗಳು, ಬೀದರ್ ರವರು ದಿ:16.8.2008 ರಂದು ಅಮಾನತ್ತುಗೊಳಿಸಿ ಹೊರಡಿಸಿರುವ ಆದೇಶವನ್ನು ಗಂಭೀರವಾಗಿ ಪರಿಗಣಿಸಿ ಜಿಲ್ಲಾಧಿಕಾರಿಗಳಿಗೆ ರೂ 5,000/– ಗಳನ್ನು ದಂಡವನ್ನಾಗಿ ಪಾವತಿಸುವಂತೆ ಹಾಗೂ ಜಿಲ್ಲಾಧಿಕಾರಿಗಳು ಹೊರಡಿಸಿರುವ ಅಮಾನತ್ತಿನ ಆದೇಶವನ್ನು ರದ್ದುಪಡಿಸಿ ತೀರ್ಪು ನೀಡಿರುತ್ತದೆ. ಮಾನ್ಯ ನ್ಯಾಯಮಾಂಡಳಿಯು ದಿ:13.10.2008 ರಂದು ನೀಡಿರುವ ತೀರ್ಪನ್ನು ಕಾನೂನು ಮುಖ್ಯಸ್ಥರು ಪರಿಶೀಲಿಸಿ ಸದರಿ ತೀರ್ಪು ಮೇಲ್ಮನವಿಗೆ ಅರ್ಹ ಪ್ರಕರಣವಲ್ಲವೆಂದು ತಿಳಿಸಿರುತ್ತಾರೆ. ಸರ್ಕಾರವು ಕರ್ನಾಟಕ ಆಡಳಿತ ನ್ಯಾಯಮಂಡಳಿಯ ದಿ:13.10.2008 ರ ತೀರ್ಪು ಹಾಗೂ ಕಾನೂನು ಕೋಶದ ಮುಖ್ಯಸ್ಥರು ನೀಡಿರುವ ಅಭಿಪ್ರಾಯ ಹಾಗೂ ಪ್ರಕರಣದ ವಾಸ್ತವಾಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ದಿ:23.12.2008ರ ಆದೇಶದಲ್ಲಿ ಜಿಲ್ಲಾಧಿಕಾರಿಗಳು ಬೀದರ್ ರವರು ಶ್ರೀ ರಾಮಕೃಷ್ಣ ಟಿ. ಪಡಗಣ್ಣನವರ, ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೀದರ್ ಇವರನ್ನು ಕಚೇರಿ ಆದೇಶ ಸಂಖ್ಯೆ:ಸಿಬ್ಬಂದಿ/ಸಿಆರ್/ಜಿಎ/2008–09/4770 ದಿ:16.8.2008 ರಂದು ಅಮಾನತ್ತುಗೊಳಿಸಿ ಹೊರಡಿಸಿರುವ ಆದೇಶವನ್ನು ರದ್ದುಪಡಿಸಿ ಇವರ ವಿರುದ್ಧ ಇರುವ ಆರೋಪಗಳನ್ನು ಹಿಂಪಡೆದು ಅವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಗೆ ಪುನರ್ ಸ್ಥಾಪಿಸಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಗುಲ್ಬರ್ಗಾ ಇಲ್ಲಿನ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ ಖಾಲಿ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿ ಅವರು ಇನ್ನು ಮುಂದೆ ಅವರ ಕಾರ್ಯನಿರ್ವಹಣೆಯಲ್ಲಿ ಎಚ್ಚರಿಕೆ ವಹಿಸುವಂತೆ ಅವರಿಗೆ ಒಂದು ಆಡಳಿತಾತ್ಮಕ ಎಚ್ಚರಿಕೆಯನ್ನು ನೀಡಿದೆ.

ಶ್ರೀ ಪಿ.ಎಸ್. ಇಟಕಂಪಳ್ಳಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಬೀದರ್ ಹಾಗೂ ಶ್ರೀ ರಾಮಕೃಷ್ಣ ಟಿ. ಪಡಗಣ್ಣನವರ, ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೀದರ್ ಇವರುಗಳ ಪ್ರಕರಣ ಒಂದೇ ಆಗಿದ್ದು, ಈ ಇಬ್ಬರು ಅಧಿಕಾರಿಗಳನ್ನು ಜಿಲ್ಲಾಧಿಕಾರಿ, ಬೀದರ್ ರವರು ಅಮಾನತ್ತುಗೊಳಿಸಿದ್ದು, ಇವರುಗಳ ಪೈಕಿ ಶ್ರೀ ರಾಮಕೃಷ್ಣ ಟಿ. ಪಡಗಣ್ಣನವರ, ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೀದರ್, ಇವರನ್ನು ಜಿಲ್ಲಾಧಿಕಾರಿಗಳು, ಬೀದರ್ ರವರು ದಿನಾಂಕ:16.8.2008 ರಂದು ಅಮಾನತ್ತುಗೊಳಿಸಿ ಆದೇಶವನ್ನು ರದ್ದುಪಡಿಸಿ ಇವರ ವಿರುದ್ಧ ಇರುವ ಆರೋಪಗಳನ್ನು ಹಿಂಪಡೆದು ದಿ:23.12.2008 ರಂದು ಆದೇಶ ಹೊರಡಿಸಿರುವ ಹಿನ್ನೆಲೆಯಲ್ಲಿ, ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ದಿ:3.1.2009ರ ಆದೇಶದಲ್ಲಿ ಜಿಲ್ಲಾಧಿಕಾರಿಗಳು, ಬೀದರ್ ರವರು ಶ್ರೀ ಪಿ.ಎಸ್. ಇಟಕಂಪಳ್ಳಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಬೀದರ್, ಇವರನ್ನು ಕಛೇರಿಯ ಆದೇಶ ಸಂಖ್ಯೆ:ಸಿಬ್ಬಂದಿ/ಜಿಎ/2008–09/5598 ದಿ:16.8.2008ರಲ್ಲಿ ಅಮಾನತ್ತುಗೊಳಿಸಿ ಹೊರಡಿಸಿರುವ ಆದೇಶವನ್ನು ರದ್ದುಪಡಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ(5)ರಲ್ಲಿ ಓದಲಾದ ದಿ:5.1.2009ರ ಪತ್ರದಲ್ಲಿ ಶ್ರೀ ಪಿ.ಎಸ್. ಇಟಕಂಪಳ್ಳಿ, ನಿರೂಪಾಣಾಧಿಕಾರಿ, ಸಹಾಯಕ ನಿರ್ದೇಶಕರ ಕಛೇರಿ, ಮಹಿಳಾ ಮತ್ತು ಮಕ್ಕಳ ಅಬಿವೃದ್ಧಿ ಇಲಾಖೆ, ಬೀದರ್ ರವರು ಶ್ರೀ ರಾಮಕೃಷ್ಣ ಟಿ., ಪಡಗಣ್ಣನವರ ಹಾಗೂ ಅವರ ಪ್ರಕರಣವು ಒಂದೇ ಆಗಿರುತ್ತದೆ. ಆದರೆ ಸರ್ಕಾರವು ಶ್ರೀ ರಾಮಕೃಷ್ಣ ಟಿ. ಪಡಗಣ್ಣನವರ

